# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 62

**ಸದಸ್ಯರ ಹೆಸರು** : ಶ್ರೀ. ನಾರಾಯಣಸ್ವಾಮಿ ( ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

**ಉತ್ತರಿಸುವವರು** : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

**ಉತ್ತರಿಸುವ ದಿನಾಂಕ** : 29.01.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವತಿಯಿಂದ ನಡೆಸಲಾಗುತ್ತಿರುವ ಸಮಾಲೋಚನಾ ಕೇಂದ್ರಗಳು, ವಿಶೇಷ ಚಿಕಿತ್ಸಾ ಘಟಕಗಳು, ಆಶ್ರಯ ಗೃಹಗಳು, ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯಗಳು ಹಾಗೂ ಕಾನೂನಿನ ನೆರವು ಮತ್ತು ಇತರೆ ಸೌಲಭ್ಯಗಳನ್ನು ಒಳಗೊಂಡಿರುವ ಇಲಾಖೆಯ ಎಲ್ಲಾ ಕಾರ್ಯಕ್ರಮಗಳನ್ನು ಪಾರದರ್ಶಕವಾಗಿ ಮಹಿಳೆಯರಿಗೆ ತಲುಪಿಸಲು ಸಹಾಯಕವಾಗುವಂತೆ ಮಹಿಳಾ ಸುರಕ್ಷತಾ ಪೋರ್ಟಲ್‌ನ್ನು ಪ್ರಾರಂಭಿಸಲಾಗಿದೆಯೇ ; | ಸರ್ಕಾರದ ಆದೇಶ ಸಂಖ್ಯೆ:ಮಮಇ:106:ಮಮಅ: 2020, ದಿನಾಂಕ: 04-12-2020ರಲ್ಲಿ ಮಹಿಳಾ ಸುರಕ್ಷತಾ ಪೋರ್ಟಲ್‌ನ್ನು ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ. |
| ಆ) | ಪ್ರಾರಂಭಿಸಿದ್ದಲ್ಲಿ (ಜಿಲ್ಲಾವಾರು ಮಾಹಿತಿ ನೀಡುವುದು) ಪ್ರಾರಂಭಿಸದೇ ಇದ್ದಲ್ಲಿ, ಯಾವಾಗ ಪ್ರಾರಂಭಿಸಲಾಗುವುದು; ಈ ವಿಳಂಬಕ್ಕೆ ಕಾರಣವೇನು ? | ಮಹಿಳಾ ಸುರಕ್ಷತಾ ಪೋರ್ಟಲ್‌ನ್ನು ಪ್ರಾರಂಭಿಸಲು ಇ-ಆಡಳಿತ ಇಲಾಖೆಯೊಂದಿಗೆ ಸಮಾಲೋಚಿಸಿ ಕ್ರಮಕೈಗೊಳ್ಳಲಾಗುತ್ತಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ,
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 13 ಮಮಅ 2021